ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಗ್ರಾಮ ಪಂಚಾಯತಿ ವ್ಯಾಪ್ತಿಯ ಗ್ರಾಮಠಾಣಾ ವ್ಯಾಪ್ತಿ ವಿಸ್ತರಣೆ ಹಕ್ಕುಪತ್ರ ನೀಡುವ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

600 (866) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ "ಗ್ರಾಮಠಾಣಾ" ವನ್ನು ಈ ಹಿಂದೆ ಸುಮಾರು 60-70 ವರ್ಷಗಳ ಹಿಂದೆ ಗುರುತಿಸಲ್ಪಟ್ಟಿದ್ದು ಪ್ರಸ್ತುತದಲ್ಲಿ ಗ್ರಾಮಠಾಣಾ ವಿಸ್ತರಣೆಯಾಗಿದ್ದು ವಿಸ್ತಾರವಾದ ಸ್ಥಳವು ಕೃಷಿ ಭೂಮಿ/ಭೂ ಪರಿವರ್ತಿತ ಭೂಮಿ/ಸರ್ಕಾರಿ ಜಮೀನು ಎಂದು ಗುರುತಿಸಲ್ಪಟ್ಟಿದೆಯೇ; (ಮಾಹಿತಿ ನೀಡುವುದು)

(ಆ) ಕಂದಾಯ ಗ್ರಾಮಕ್ಕೆ ಹೊಂದಿಕೊಂಡಿರುವಂತೆ ದಾಖಲೆ ಗ್ರಾಮಗಳು ಸುಮಾರು 0.5 ಕಿ.ಮೀ ನಿಂದ 2.0 ಕಿ.ಮೀ ವರೆಗೆ ಕೊಪ್ಪಲು, ಪಾಳ್ಯಗಳು, ಇದ್ದು ಸದರಿ ಗ್ರಾಮಗಳಲ್ಲಿ ವಾಸವಿರುವ ಕುಟುಂಬಗಳಿಗೆ ಗ್ರಾಮಠಾಣಕ್ಕೆ ಒಳಪಡದಿರುವುದರಿಂದ ಗ್ರಾಮ ಪಂಚಾಯಿತಿಯಿಂದ ನೀಡುವ ಯಾವುದೇ ಸೌಲಭ್ಯಗಳು ಲಭ್ಯವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಉದಾ: ವಸತಿ ಯೋಜನೆ, ವಿದ್ಯುತ್, ಇತರೆ ಮೂಲಭೂತ ಸೌಲಭ್ಯಗಳು ದೊರೆಯದೆ ಇರುವುದು)

(ಇ) ಪ್ರಸ್ತುತ ಸರ್ಕಾರಿ ಜಮೀನುಗಳಲ್ಲಿ ಮನೆಗಳನ್ನು ನಿರ್ಮಾಣ ಮಾಡಿಕೊಂಡಿರುವವರಿಗೆ ಸಕ್ರಮ ಮಾಡಲು ಗ್ರಾಮ ಮಟ್ಟದಲ್ಲಿ 94 ಸಿ ಹಾಗೂ ಪಟ್ಟಣ ವ್ಯಾಪ್ತಿಯಲ್ಲಿ 94 ಸಿಸಿ ಜಾರಿಗೆ ತಂದಿದ್ದರೂ ಸಹ ಈವರೆಗೂ ಯಾವುದೇ ಹಕ್ಕು ಪ್ರಮಾಣ ಪತ್ರ ನೀಡದಿರುವುದರಿಂದ ಗ್ರಾಮಠಾಣಾ ವಿಸ್ತರಣೆ ಮಾಡಲು ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಸರ್ಕಾರದ ನಿಲುವೇನು? (ವಿವರವಾದ ಮಾಹಿತಿ ನೀಡುವುದು)